# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 427
ಸದಸ್ಯರ ಹೆಸರು : ಶ್ರೀ ಕೆ.ಟಿ ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 09-03-2020.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಯಾವ ವರ್ಷದವರೆಗಿನ ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲಾಗಿದೆ; | 1995ನೇ ಸಾಲಿನವರೆಗೆ ಖಾಸಗಿ ಶಾಲೆಗಳನ್ನು ವೇತನಾನುದಾನಕ್ಕೆ ಒಳಪಡಿಸಲಾಗಿದೆ. |
| ಆ. | 1995ರ ನಂತರ ಪ್ರಾರಂಭವಾದ ಕನ್ನಡ ಮಾಧ್ಯಮದ ಶಾಲಾ-ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಬಗ್ಗೆ ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; | ದಿನಾಂಕ:14-01-2020ರಂದು ವಿವಿಧ ಕನ್ನಡ ಮಾಧ್ಯಮ ಶಾಲಾ ವ್ಯವಸ್ಥಾಪಕ ಮಂಡಳಿಗಳ ಪ್ರತಿನಿಧಿಗಳ ಜೊತೆ ನಡೆದ ಸಭೆಯಲ್ಲಿ 1995ರ ನಂತರದಲ್ಲಿ ಪ್ರಾರಂಭವಾದ ಖಾಸಗಿ ಅನುದಾನ ರಹಿತ ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳಿಗೆ ಸಹಾಯಾನುದಾನಕ್ಕೆ ಒಳಪಡಿಸುವ ಕುರಿತಂತೆ ಚರ್ಚಿಸಿಲಾಗಿದೆ. 1995ರಿಂದ 2018ರವರೆಗೆ ಸಂಬಂಧಿಸಿದಂತೆ ಪ್ರತಿ 5 ವರ್ಷದ ಬ್ಲಾಕ್ ಅವಧಿಗೆ ಒಟ್ಟು ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳ ಸಂಖ್ಯೆಯನ್ನು ಅವುಗಳ ಹೆಸರಿನೊಂದಿಗೆ ಮತ್ತು ಒಟ್ಟು ಶಿಕ್ಷಕರುಗಳ ಸಂಖ್ಯೆಯನ್ನು ಹಾಗೂ ಅಂದಾಜು ವೆಚ್ಚದ ಮಾಹಿತಿಯನ್ನು ನೀಡಿದ್ದಲ್ಲಿ ಈ ಬೇಡಿಕೆಯ ಕುರಿತಂತೆ, ನಿರ್ಣಯಿಸಲು ಸಾದ್ಯವಾಗುತ್ತದೆ ಎಂದು ಮನಗಂಡು, ಪ್ರತಿ 5 ವರ್ಷಕ್ಕೆ ಸೀಮಿತಗೊಳಿಸಿ ಮಾಹಿತಿಯನ್ನು ಕ್ರೋಢಿಕರಿಸಲು ನಿರ್ಧರಿಸಿದ್ದು, ಅದರಂತೆ ಕ್ರೋಢಿಕೃತ ಮಾಹಿತಿಯನ್ನು ಪಡೆಯಲು ಕ್ರಮಕೈಗೊಳ್ಳಲಾಗಿದೆ. ಕ್ರೋಢಿಕೃತ ಮಾಹಿತಿ ಸ್ವೀಕೃತವಾದ ಕೂಡಲೇ ಪ್ರತಿ 5 ವರ್ಷಕ್ಕೆ ಸೀಮಿತಗೊಳಿಸಿ ಆರ್ಥಿಕ ಪರಿಣಾಮಗಳ ಮಾಹಿತಿಯೊಂದಿಗೆ ಸೂಕ್ತ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಅನುಮೋದನೆಗಾಗಿ ಸಲ್ಲಿಸಲಾಗುವುದು. |
| ಇ. | ಇದ್ದಲ್ಲಿ, ಯಾವ ವರ್ಷದವರೆಗಿನ ಶಾಲಾ-ಕಾಲೇಜುಗಳನ್ನು ಯಾವಾಗ ವೇತನಾನುದಾನಕ್ಕೆ ಒಳಪಡಿಸಲಾಗುವುದು; (ವಿವರ ನೀಡುವುದು) | |

**ಇಡಿ 41 ಪಿಎಂಸಿ 2020**

[ಎಸ್.ಸುರೇಶ್ ಕುಮಾರ್]
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**